# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಕೆ.ಎ ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1485

ಉತ್ತರ ದಿನಾಂಕ : 24.09.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಭಾರತ ಸರ್ಕಾರದ ಜಲ ಜೀವನ್ ಮಿಷನ್ (Jal Jeevan Mission-JJM) ಅಡಿ 2024ರ ಅಂತ್ಯಕ್ಕೆ ದೇಶದಲ್ಲಿರುವ ಪ್ರತಿಯೊಂದು ವಾಸಿಸುವ ಮನೆಗೆ ಕುಡಿಯುವ ನೀರಿನ ನಳ ಜೋಡಣೆ ಗುರಿಯನ್ನು ಹೊಂದಿರುವುದು ನಿಜವೇ; (ಹಾಗಿದ್ದಲ್ಲಿ ಈ ಅಭಿಯಾನದ ಮುಖ್ಯ ಧ್ಯೇಯೋದ್ದೇಶ, ಕ್ರಿಯಾ ಯೋಜನೆ ಮತ್ತು ಯೋಜನಾ ವೆಚ್ಚ ಗಾತ್ರದ ವಿವರ ನೀಡುವುದು) | ಜಲ ಜೀವನ್ ಮಿಷನ್ ಯೋಜನೆಯಡಿ ರಾಜ್ಯದ ಎಲ್ಲಾ ಗ್ರಾಮೀಣ ಮನೆಗಳಿಗೆ 55LPCD ಯಂತೆ ಶುದ್ಧ ಕುಡಿಯುವ ನೀರನ್ನು ಕಾರ್ಯಾತ್ಮಕ ನಳ ಸಂಪರ್ಕ ಮೂಲಕ 2024ರೊಳಗಾಗಿ ಒದಗಿಸುವ ಉದ್ದೇಶ ಹೊಂದಲಾಗಿದೆ.<br>ರಾಜ್ಯದಲ್ಲಿ ಸುಮಾರು 97.91ಲಕ್ಷ ಗ್ರಾಮೀಣ ಮನೆಗಳಿದ್ದು, ಮಾರ್ಚ್ 2021ರ ಅಂತ್ಯಕ್ಕೆ, 28.15ಲಕ್ಷ ಮನೆಗಳಿಗೆ ಕಾರ್ಯಾತ್ಮಕ ನಳ ಸಂಪರ್ಕ ಒದಗಿಸಲಾಗಿರುತ್ತದೆ. ಈವರೆಗೆ ಒಟ್ಟಾರೆ 34.90ಲಕ್ಷ (ಶೇ.35.64 ರಷ್ಟು) ಮನೆಗಳಿಗೆ ಕಾರ್ಯಾತ್ಮಕ ನಳ ಸಂಪರ್ಕ ಒದಗಿಸಲಾಗಿರುತ್ತದೆ.<br>ಮಾರ್ಚ್-2024ರ ಅಂತ್ಯದಂತೆ, ಉಳಿದ 69.75ಲಕ್ಷ ಮನೆಗಳಿಗೆ ನಳ ಸಂಪರ್ಕ ಒದಗಿಸಲು ರೂ.11,010.00ಕೋಟಿಗಳನ್ನು ಹಾಗೂ ಸುಸ್ಥಿರ ಜಲಮೂಲಗಳ ಮೂಲಕ ಸಗಟು ನೀರು ಸರಬರಾಜು ವ್ಯವಸ್ಥೆ ಕಲ್ಪಿಸಲು ರೂ.30,790.00ಕೋಟಿಗಳನ್ನು ಸೇರಿಸಿ ಒಟ್ಟಾರೆಯಾಗಿ, ರೂ.41,800.00ಕೋಟಿಗಳ ಯೋಜನಾ ವೆಚ್ಚವನ್ನು ಅಂದಾಜಿಸಲಾಗಿದೆ. |
| ಆ) | ಕೇಂದ್ರ ಸರ್ಕಾರದ ಜಲ-ಜೀವನ್ ಮಿಷನ್‌ನಲ್ಲಿ ಅನುಷ್ಠಾನಗೊಳಿಸಲು ಉದ್ದೇಶಿಸಿರುವ ಪ್ರಮುಖ ಅಂಶಗಳು ಯಾವುವು; (ವಿವರ ನೀಡುವುದು) | ಜಲ ಜೀವನ್ ಮಿಷನ್ ಯೋಜನೆಯಡಿ 2024ರೊಳಗಾಗಿ ರಾಜ್ಯದ ಎಲ್ಲಾ ಗ್ರಾಮೀಣ ಮನೆಗಳಿಗೆ 55 LPCD ಯಂತೆ ಶುದ್ಧ ಕುಡಿಯುವ ನೀರನ್ನು ಕಾರ್ಯಾತ್ಮಕ ನಳ ಸಂಪರ್ಕ ಮೂಲಕ ಸಮುದಾಯದ ಸಹಭಾಗಿತ್ವದೊಂದಿಗೆ ಒದಗಿಸುವ ಉದ್ದೇಶ ಹೊಂದಲಾಗಿದೆ. |
| ಇ) | ಭಾರತ ಸರ್ಕಾರ ಈ ಹಿಂದೆ ಗ್ರಾಮಾಂತರ ಪ್ರದೇಶಗಳಲ್ಲಿ ಕುಡಿಯುವ ನೀರು ಪೂರೈಕೆಗೆ ಅನುಷ್ಠಾನಗೊಳಿಸುತ್ತಿದ್ದ ಯಾವುದಾದರೂ ಯೋಜನೆಗಳನ್ನು ಜಲ-ಜೀವನ್ ಮಿಷನ್‌ನಲ್ಲಿ ಸೇರ್ಪಡೆ ಮಾಡಿಕೊಳ್ಳಲಾಗಿದೆಯೇ / ಅಡಕಗೊಳಿಸಲಾಗಿದೆಯೇ; (ವಿವರ ನೀಡುವುದು) | ಕೇಂದ್ರ ಸರ್ಕಾರದಿಂದ 15 ಆಗಸ್ಟ್-2019ರವರೆಗೆ ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರು ಯೋಜನೆ (NRDWP) ಜಾರಿಯಲ್ಲಿದ್ದು, ತದನಂತರ ಜಲ ಜೀವನ್ ಮಿಷನ್ ಅಡಿ NRDWP ಯೋಜನೆಯನ್ನು ಸೇರ್ಪಡೆ ಮಾಡಲಾಗಿರುತ್ತದೆ. |
| ಈ) | ರಾಜ್ಯ ಮಟ್ಟದಲ್ಲಿ ಜಲ-ಜೀವನ್ ಮಿಷನ್ (JJM) ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರ ಕ್ರಿಯಾಶೀಲ ಯೋಜನೆ ತಯಾರಿಸಿದೆಯೇ; ಹಾಗಿದ್ದಲ್ಲಿ, ವಿವರ ನೀಡುವುದು. | ರಾಜ್ಯದಲ್ಲಿ ಜಲ-ಜೀವನ್ ಮಿಷನ್ (JJM) ಯೋಜನೆಯನ್ನು ಅನುಷ್ಠಾನಗೊಳಿಸಲು ವಾರ್ಷಿಕ ಕ್ರಿಯಾ ಯೋಜನೆಯನ್ನು ಕೆಳಗಿನಂತೆ ತಯಾರಿಸಲಾಗಿರುತ್ತದೆ. |

| ಕ್ರಸಂ | ವರ್ಷ | ಯೋಜಿಸಲಾಗಿರುವ FHTCs ಸಂಖ್ಯೆ ಲಕ್ಷಗಳಲ್ಲಿ | ಯೋಜನಾ ಅಂದಾಜು ವೆಚ್ಚ (ರೂ. ಕೋಟಿಗಳಲ್ಲಿ) |
|---|---|---|---|
| 1 | 2021-22 | 25.17 | 14,001.55 |
| 2 | 2022-23 | 27.14 | 16,910.45 |
| 3 | 2023-24 | 17.45 | 10,888.00 |
| | ಒಟ್ಟು | 69.76 | 41,800.00 |

| | | |
|---|---|---|
| ಉ) | ರಾಜ್ಯ ಸರ್ಕಾರ ಜಲ–ಜೀವನ್ ಮಿಷನ್ ಅನುಷ್ಠಾನಗೊಳಿಸಲು ಸ್ಥಾಪಿಸಿರುವ ಸಾಂಕೇತಿಕ ವ್ಯವಸ್ಥೆಗಳು ಯಾವುವು; | ರಾಜ್ಯದಲ್ಲಿ ಜಲ–ಜೀವನ್ ಮಿಷನ್ (JJM) ಯೋಜನೆಯನ್ನು ಅನುಷ್ಠಾನಗೊಳಿಸಲು ಮಾರ್ಗಸೂಚಿಗಳನ್ವಯ . ಸ್ಥಾಪಿಸಿರುವ ಸಾಂಸ್ಥಿಕ ಕಾರ್ಯತಂತ್ರ ವ್ಯವಸ್ಥೆ ಈ ಕೆಳಕಂಡಂತಿದೆ.<br>• ರಾಜ್ಯಮಟ್ಟದಲ್ಲಿ – ರಾಜ್ಯ ನೀರು ಮತ್ತು ನೈರ್ಮಲ್ಯ ಮಿಷನ್ (State Water & Sanitation Mission)- for State Action Plan Approval<br>• ಜಿಲ್ಲಾ ಮಟ್ಟದಲ್ಲಿ – ಜಿಲ್ಲಾ ನೀರು ಮತ್ತು ನೈರ್ಮಲ್ಯ ಮಿಷನ್ (District Water & Sanitation Mission),- for District Action Plan Approval<br>• ಗ್ರಾಮ ಮಟ್ಟದಲ್ಲಿ– ಗ್ರಾಮ ನೀರು ಮತ್ತು ನೈರ್ಮಲ್ಯ ಸಮಿತಿ (Village Water & Sanitation Committee) - for Village Action Plan Approval |
| ಊ) | ಕೇಂದ್ರ ಸರ್ಕಾರ ರಾಜ್ಯಗಳಿಗೆ ಜಲ–ಜೀವನ್ ಮಿಷನ್ ಅಡಿಯಲ್ಲಿ ನೀಡುತ್ತಿರುವ ಅನುದಾನಕ್ಕೆ ನಿಗದಿಪಡಿಸಿರುವ ಮಾನದಂಡಗಳು ಯಾವುವು; | ಕೇಂದ್ರ ಸರ್ಕಾರ ಹೊರಡಿಸಿರುವ ಕಾರ್ಯಕಾರಿ ಮಾರ್ಗಸೂಚಿ ಅಧ್ಯಾಯ–7.3 ರಲ್ಲಿ ಅನುದಾನದ ಹಂಚಿಕೆ ಮಾನದಂಡಗಳನ್ನು ಈ ಕೆಳಕಂಡಂತೆ ನಿಗದಿಪಡಿಸಿದೆ. |

| ಮಾನದಂಡಗಳು | ಆಧಾರದನ್ವಯ |
|---|---|
| ಗ್ರಾಮೀಣ ಜನಸಂಖ್ಯೆ (ಹಿಂದಿನ ಜನಗಣತಿಯನ್ವಯ) | 30 |
| ಗ್ರಾಮೀಣ ಪ.ಜಾತಿ ಮತ್ತು ಪಂಗಡದ ಜನಸಂಖ್ಯೆ | 10 |
| DDP, DPAP, HADP ಮತ್ತು ವಿಶೇಷ ವರ್ಗದ ರಾಜ್ಯಗಳ ಗ್ರಾಮೀಣ ಪ್ರದೇಶಗಳು | 30 |
| ಹಿಂದಿನ ಹಣಕಾಸು ವರ್ಷದಲ್ಲಿ (ಮಾರ್ಚ್ 31 ರೊಳಗೆ)ರಾಸಾಯನಿಕ ಮಿಶ್ರಣ ಮತ್ತು ಭಾರಲೋಹದ ಪರಿಣಾಮ ಅನುಭವಿಸಿದ ಗ್ರಾಮೀಣ ಪ್ರದೇಶಗಳು (IMIS ವರದಿಯಂತೆ) | 10 |
| ಪ್ರತಿ ಮನೆಗೆ ನಳ ಸಂಪರ್ಕ ಕಲ್ಪಿಸುವ ಪ್ರದೇಶಗಳು | 20 |

ರಾಜ್ಯ / ಕೇಂದ್ರಾಡಳಿತ ಪ್ರದೇಶಗಳಿಗೆ ಹಂಚಿಕೆಯಾದ ಅನುದಾನ / ನಿಧಿಯಲ್ಲಿ ನೆರವು ಚಟುವಟಿಕೆಗಳು ಮತ್ತು WQM&S ಚಟುವಟಿಕೆಗಳಿಗೆ ಕ್ರಮವಾಗಿ ಶೇ.5 ವರೆಗೆ ಮತ್ತು ಶೇ.2 ರಷ್ಟು ಹಣವನ್ನು ಒಟ್ಟು ಆಯವ್ಯಯದಲ್ಲಿ ಬಳಸಿಕೊಳ್ಳಲಾಗುತ್ತದೆ. ಗ್ರಾಮೀಣ ಕುಟುಂಬಗಳಿಗೆ FHTC ಒದಗಿಸಲು ಉಳಿದ ಬಾಕಿ ಮೊತ್ತವನ್ನು ಬಳಸಿಕೊಳ್ಳಲಾವುದು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಹಣವನ್ನು ಆ ಪಂಗಡಗಳ ಜನಸಂಖ್ಯೆಗೆ ಅನುಗುಣವಾಗಿ ರಾಜ್ಯದಲ್ಲಿ ಮೀಸಲಿಡಲಾಗುತ್ತದೆ.

| | | |
|---|---|---|
| | ರಾಜ್ಯದಲ್ಲಿ ಜಲ–ಜೀವನ್ ಮಿಷನ್ ಅನುಷ್ಠಾನದ ಬಗ್ಗೆ ಕೇಂದ್ರ ಅಥವಾ ರಾಜ್ಯ ಸರ್ಕಾರಗಳು ಅಧ್ಯಯನ ಕೈಗೊಂಡಿವೆಯೇ; ಇಲ್ಲದಿದ್ದಲ್ಲಿ ಕೈಗೊಳ್ಳಲು ಉದ್ದೇಶಿಸಲಾಗಿದೆಯೇ? | ಕೇಂದ್ರ ಸರ್ಕಾರವು ಮುಖ್ಯ ವೈಜ್ಞಾನಿಕ ಸಲಹೆಗಾರರ ಅಧ್ಯಕ್ಷತೆಯಲ್ಲಿ ತಾಂತ್ರಿಕ ಸಮಿತಿಯನ್ನು ಮೇಲಿನ ಮಾರ್ಗಸೂಚಿಯ ಅಧ್ಯಾಯ–8.5 ರಚಿಸಿದೆ.<br>ರಾಜ್ಯದಲ್ಲಿ ಜಲ ಜೀವನ್ ಮಿಷನ್ ಅನುಷ್ಠಾನದ ಬಗ್ಗೆ ಕೇಂದ್ರ ಸರ್ಕಾರದಿಂದ ಕಾರ್ಯಾತ್ಮಕತೆಯ ಮೌಲ್ಯಮಾಪನ (Functionality Assessment) ಕೈಗೊಳ್ಳಲಾಗುತ್ತಿದೆ. |

ಸಂಗ್ರಾಕುನೀ&ನೈಇ 247 ಗ್ರಾನೀಸ(4)2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು